ಡಾ॥ ಶ್ರೀನಿವಾಸ ಹಾವನೂರ

# ಬಾಸೆಲ್ ಮಿಶನ್ನಿನ ಗಾಡ್‌ಫ್ರೆ ವೈಗಲ್

(೧೮೧೬ — ೧೮೫೫)

ಕರ್ನಾಟಕದಲ್ಲಿ ಬಾಸೆಲ್ ಇವ್ಯಾಂಜೆಲಿಕಲ್ ಮಿಶನ್ ನೆಲೆಗೊಳ್ಳುವುದಕ್ಕೆ ಹಲವು ಮಿಶನರಿಗಳು ಅವ್ಯಾಹತವಾಗಿ ಪರಿಶ್ರಮಿಸಬೇಕಾಯಿತು. ಅಂಥ ಆರಂಭಕಾರರಲ್ಲಿ ವೈಗಲ್ ಪ್ರಮುಖನು. ಆದರೇನು, ಅವನ ಹೆಸರನ್ನು ಕೂಡಾ ಕೇಳದಿರುವಷ್ಟು ಆತ ಅಪರಿಚಿತನಾಗಿಯೇ ಉಳಿದನು. ಅದರ ಕಾರಣಗಳೆಂದರೆ ಅವನು ಜಾತ್ಯತಃ ಅತ್ಯಂತ ಪ್ರಸಿದ್ಧಿ ವಿಮುಖನಿದ್ದ. ಎರಡನೆಯದು, ಅವನ ಇಲ್ಲಿಯ ಕಾರ್ಯಾವಧಿಯೇ ಕಡಿಮೆಯದಿದ್ದಿತು–ಚಿಕ್ಕ ವಯಸ್ಸಿನಲ್ಲಿ ತೀರಿಕೊಂಡನಾದ್ದರಿಂದ. ಈ ಲೇಖದ ಮಟ್ಟಿಗೆ ಅವನ ಪ್ರಾಮುಖ್ಯವಿದ್ದುದು, ಅವನ ಭಾರತೀಯ ತತ್ವಜ್ಞಾನದ ಕುರಿತ ಪರಿಣತಿ ; ಭಾಷಾವಿದಗ್ಧತೆ ಹಾಗೂ ಬೈಬಲಿನ ಕನ್ನಡಾನುವಾದದಲ್ಲಿ ತೋರಿದ ಅನುಪಮವಾದ ಶ್ರದ್ಧೆ. ಮೊದಲಿನ ಎರಡು ಅಂಶಗಳಲ್ಲಿ ಅವನನ್ನು ಮೀರಿಸಿದ್ದವ ಒಬ್ಬನೇ ಆತ ಕಿಟೆಲ್.

ವೈಗಲನ ಜನನ ೧-೭-೧೮೧೬ ರಂದು ; ತ್ಸೆಲ್ ಎಂಬ ಹಳ್ಳಿಯಲ್ಲಿ. ತಂದೆ ಒಬ್ಬ ನಿಷ್ಠಾವಂತ ಭಾವುಕ ಪಾದ್ರಿ. ತಾಯಿ ಅತಿ ಮುಗ್ಧೆ. ಅದೇನು ಕಾರಣವೊ ಗಾಡ್‌ಫ್ರೆ ತನ್ನ ಬಾಲ್ಯವನ್ನು ಅಜ್ಜ- ಅಜ್ಜಿಯರ ಮನೆಯಲ್ಲಿ ಕಳೆಯಬೇಕಾಯಿತಂತೆ. ಆಮೇಲೆಯಾದರೂ ತಂದೆ ತಾಯಿಗಳು, ಇವನು ೧೮ ವರ್ಷದವನಾಗುವ ಮೊದಲೇ ತೀರಿಹೋದರು.

ಆಗಿನ ಕಾಲದ ವಿದ್ಯಾರ್ಥಿಗಳಿಗೆ ತೀಬಿಂಜೆನ್ ವಿಶ್ವವಿದ್ಯಾಲಯದ ಆಕರ್ಷಣೆ ಹೆಚ್ಚಿನದಾಗಿರಬೇಕು. ಅಲ್ಲಿ ವೈಗಲ್ ೧೮೩೫-೩೮ ರ ಅವಧಿಯಲ್ಲಿ ವ್ಯಾಸಂಗ ಮಾಡಿದ. ಆಗ ಅವನು ಕಲಿತ ವಿಷಯಗಳಲ್ಲಿ ಅರಬ್ಬೀ ಹಾಗೂ ಸಂಸ್ಕೃತಗಳೂ ಇದ್ದುವು. ಆ ಮುಂದೆ ಬಾಸೆಲ್ ಮಿಶನ್‌ನಲ್ಲಿ ಶಿಕ್ಷಕನಾಗಿಯೇ ತನ್ನ ವೃತ್ತಿಯನ್ನು ಆರಂಭಿಸಿದನು. ಅಲ್ಲಿಂದ ಭಾರತಕ್ಕೆ ಬರುವುದು ಕ್ರಮಪ್ರಾಪ್ತವೆನ್ನುವಷ್ಟು ಸೀದಾ ಇಲ್ಲಿಗೆ ಮುಂಬಯಿ ಮಾರ್ಗವಾಗಿ ಹೊರಟು ಬಂದನು (೧೮೪೦). ಆಗ ಅವನ ಜೊತೆಗಿದ್ದವರೆಂದರೆ ಜೆ. ಮುಲ್ಲರ್, ಜೆ ಅಮ್ಮಾನ್ ಮತ್ತು ಎಂ. ಫ್ರಿಜ್.

ಮಂಗಳೂರಿನಲ್ಲಿ ಹರ್ಮನ್ ಮೊಗ್ಲಿಂಗ್ ಅವನ ಆಪ್ತ ಸ್ನೇಹಿತನೆನಿಸಿದ. ಬಾಸೆಲ್ ಮಿಶನ್ನಿನ ಆರಂಭಕಾಲದ ಮಿಶನರಿಗಳಲ್ಲೆಲ್ಲ ಮೊಗ್ಲಿಂಗ್ ಅತ್ಯಂತ ಮೇಧಾವಿ ಹಾಗೂ ಕರ್ತೃತ್ವಶಾಲಿ ಎಂಬ ಖ್ಯಾತಿಯನ್ನು ಹೊಂದಿದ್ದನು. ವೈಗಲ್‌ನಿಗೆ ಆತನು ಆಪ್ತ ಸಂಬಂಧಿಯೂ ಹೌದು. (ಎಂದರೆ ಮೊಗ್ಲಿಂಗನ ಮಲತಾಯಿಯು ವೈಗಲನ ತಂದೆಯ ಎರಡನೇ ಹೆಂಡತಿ) . ವೈಗಲ್‌ನ ಮದುವೆಯ ವಿಷಯದಲ್ಲಿ ಮೊಗ್ಲಿಂಗನ ತಂದೆಯೇ ಆಸ್ಥೆ ವಹಿಸಿ ಪಾಲಿನ್ ಎಂಬವಳನ್ನು ಸಲಹೆ ಮಾಡಿದ್ದನಂತೆ. ಇಂಥ ಸಂಬಂಧ ಅಷ್ಟಕ್ಕೇ ಮುಗಿಯಲಿಲ್ಲ. ವೈಗಲ್ ನಡುವಯದಲ್ಲಿ ತೀರಿಕೊಂಡಾಗ, ಅದುವರೆಗೆ ಮದುವೆಯೇ ಆಗದಿದ್ದ ಮೊಗ್ಲಿಂಗ್ ಪಾಲಿನ್‌ಳನ್ನೇ ಮದುವೆಯಾದುದಲ್ಲದೆ, ವೈಗಲ್ ದಂಪತಿಗಳ ನಾಲ್ವರು ಮಕ್ಕಳನ್ನೂ ಸಾಕುವ ಹೊಣೆ ಹೊತ್ತನು. ಅಷ್ಟರ

ಮಟ್ಟಿಗೆ ಈ ಜ್ಞಾತಿ–ಸ್ನೇಹಿತರ ಸದ್ಭಾವವು ಆಳವಾಗಿದ್ದಿತು.

ಮೊಗ್ಲಿಂಗ್ ಇವನಿಗಿಂತ ನಾಲ್ಕು ವರ್ಷ ಮುಂಚೆಯೇ ಬಂದವನಷ್ಟೆ. ಆಗಿನ ಕ್ರಮದಂತೆ ಮೊದಲು ಬಂದ ಮಿಶನರಿಗಳು ಅನಂತರ ಬಂದವರಿಗೆ ಸ್ಥಾನಿಕ ಭಾಷೆಯನ್ನು ಕಲಿಸಬೇಕು. ವೈಗಲ್ ಕನ್ನಡ – ತುಳು ಭಾಷೆಗಳನ್ನು ಹಾಗೆ ಕಲಿತನೆನ್ನಬಹುದೆ ? ಇಲ್ಲ. ಮೊಗ್ಲಿಂಗನೇ ಹೀಗೆ ಹೇಳಿದ್ದಾನೆ :

> "When and how he learned Canerese in which I don't, and if any Missionary excelled him, I cannot tell though we lived day and night together for several days."

ಆರಂಭ ಕಾಲದ ಮಿಶನರಿ ಜನರು ಎಲ್ಲ ಬಗೆಯ ಕೆಲಸಕ್ಕೂ ಅಣಿಯಾಗಬೇಕಿತ್ತಲ್ಲದೆ–ಪ್ರವಚನ, ಅನುವಾದ ಮುದ್ರಣ, ಶಿಕ್ಷಣ, ವೃತ್ತಿ ತರಬೇತಿ, ಏನೆಲ್ಲ. ಮಂಗಳೂರಿಗೆ ಬಂದ ಕೆಲವೇ ತಿಂಗಳಲ್ಲಿ ವೈಗಲ್ ಅಲ್ಲಿಯ ಇಂಗ್ಲಿಶ್ ಶಾಲೆಯನ್ನು ವಹಿಸಿಕೊಂಡನು (೧೮೪೧). ಮಿಶನ್ನಿಗೆ ತನ್ನದೇ ಆದ ಮುದ್ರಣಾಲಯವಿಲ್ಲದ್ದು ಅವನಿಗೆ ಬಹು ದೊಡ್ಡ ಕೊರತೆಯಾಗಿ ಕಂಡಿತು. ಸ್ವದೇಶದಿಂದ ಹೊರಟು ಇಲ್ಲಿಗೆ ಬರುವ ಮುಂಚೆ ಮುಂಬಯಿಯಲ್ಲಿ ಕೈ ಮುದ್ರಣದ, ಯಂತ್ರಗಳನ್ನು ಕಂಡಿದ್ದನು. ಅಲ್ಲಿದ್ದವರ ಅಲ್ಪ ಪರಿಚಯದ ಆಸರೆಯನ್ನು ನೆಚ್ಚಿಕೊಂಡು, ಮುಂಬಯಿಗೆ ಹೋಗಿ ಬಂದು ಮುದ್ರಾಯಂತ್ರವನ್ನು ತಂದೇಬಿಟ್ಟನು (೧೮೪೨). ಕರ್ನಾಟಕವಷ್ಟೆ ಅಲ್ಲದೆದಕ್ಷಿಣ ಭಾರತದಲ್ಲಿಯೇ ಶ್ರೇಷ್ಠ ಮುದ್ರಣಾಲಯವೆಂದು ೬೦–೭೦ ವರ್ಷಗಳ ಕಾಲ ಖ್ಯಾತಿಯನ್ನು ಪಡೆದಿದ್ದ ಬಾಸೆಲ್ ಮಿಶನ್ನಿನ ಮುದ್ರಣ ಕಾರ್ಯಕ್ಕೆ ವೈಗಲನೇ ಹೀಗೆ ನಾಂದಿಯನ್ನು ಹಾಡಿದನೆಂಬುದನ್ನು ಗಮನಿಸತಕ್ಕದು.

ಆಮೇಲೆ ವೈಗಲ್‌ನನ್ನು ನೀಲಗಿರಿಗೆ ಕಳಿಸಲಾಯಿತು. ಅಲ್ಲಿಯ ಬ್ರಿಟಿಶ್ ಅಧಿಕಾರಿ ಕೆಸಮಜೋರ್ ಎಂಬವನ ಪ್ರೋತ್ಸಾಹ–ಪೋಷಣೆಯಿಂದ ವೈಗಲ್ ಬಡಗು ಮಿಶನ್ ಸ್ಥಾಪಿಸಿದನು. ತನ್ನ ಕಡೆಗಾಲದಲ್ಲಿ ಅವನು ಕೆಲವು ವರ್ಷ ಧಾರವಾಡದ ಮಿಶನ್ನಿನಲ್ಲಿಯೂ ಸೇವೆ ಸಲ್ಲಿಸಿದ್ದಾನೆ.

ವೈಗಲ್‌ನ ಕುಶಾಗ್ರಮತಿತ್ವವು ಮಿಶನ್ನಿನ ಸಹೋದ್ಯೋಗಿಗಳಿಗೆ ಆದಾಗಲೇ ಮನದಟ್ಟಾಗಿದ್ದಿತು. He seemed to take things into his mind as one puts food into one's mouth to digest at his ease ; and then it was his own—ಎಂಬ ಮೊಗ್ಲಿಂಗನ ಹೇಳಿಕೆಯ ಇಂಗಿತ ಇದುವೇ. ಜೊತೆಗೆ ವೈರುಧ್ಯವೆನಿಸುವಂಥ ವಿಷಯಗಳಲ್ಲಿಯೂ ಅವನಿಗೆ ಆಳವಾದ ಆಸಕ್ತಿ ಇದ್ದಿತು. ಉದಾಹರಣೆಗೆ ಗಣಿತ, ಸಂಗೀತ, ವೈದ್ಯಕೀಯ.

ವಿಶೇಷವಾಗಿ ಉಲ್ಲೇಖಿಸಬೇಕಾದದ್ದು ಅವನ ಭಾರತೀಯ ತತ್ವಜ್ಞಾನದ ವ್ಯಾಸಂಗ. ಕ್ರಿ. ಶ. ೧೮೪೬ ರ ಸುಮಾರಿಗೆ ಲಂಡನ್ ಮಿಶನ್ನಿನ ಜಾನ್ ಗ್ಯಾರೆಟ್ ಭಗವದ್ಗೀತೆಯ ವಿವಿಧ ಭಾಷಾನುವಾದಗಳುಳ್ಳ ಹಾಗೂ ವ್ಯಾಪ್ತಿ ಇರುವ ಆವೃತ್ತಿಯನ್ನು ಹೊರ ತರಬಯಸಿದಾಗ ವೈಗಲ್ ಅವನಿಗೆ ಸಲಹೆ ಇತ್ತುದಲ್ಲದೆ, ಗೀತೆಯ ಕನ್ನಡ ಅನುವಾದದ ತಿದ್ದುಗೆಯಲ್ಲಿ ಆಸರೆಯಾಗಿದ್ದಾನೆ. ಬ್ಯಾರನ್ ಹಂಬೋಲ್ಟ್ ಎಂಬ ಜರ್ಮನ್ ತತ್ವವೇತ್ತನು ಭಗವದ್ಗೀತೆಯನ್ನು ಕುರಿತು ಪ್ರೌಢವಾದ ವ್ಯಾಖ್ಯಾನವನ್ನು ಬರೆದಿದ್ದು, ವೈಗಲ್ ಅದರ ಇಂಗ್ಲಿಷ್ ಅನುವಾದ ಮಾಡಿ ಗ್ಯಾರೆಟ್‌ನಿಗೆ ಕಳಿಸಿಕೊಟ್ಟನು. ಜೊತೆಗೆ ಅದಕ್ಕೆ ತನ್ನ ಟೀಕೆ–ಟಿಪ್ಪಣಿಯನ್ನೂ ಸೇರಿಸಿದನು. This interpretation of the learned Baron is very doubtful ಎಂದು ಅಭಿಪ್ರಾಯಿಸುವಷ್ಟು ವೈಗಲನ ಆರ್ಷೇಯ ವ್ಯಾಸಂಗವು ಪ್ರಬುದ್ಧವಾಗಿದ್ದಿತು.

ವೈಗಲನ ಇನ್ನೊಂದು ಮನನೀಯ ಕೃತಿಯೆಂದರೆ ಬನ್ಯನ್ನನ **Pilgrim's Progress** ದ ಕನ್ನಡಾನುವಾದ. 'ಯಾತ್ರಿಕನ ಸಂಚಾರ' ಎಂದು ಅದರ ಹೆಸರು. ಆ ಮುಂಚೆ ಅದು ಅನುವಾದಗೊಂಡಿದ್ದರೂ (ಬಳ್ಳಾರಿ ಮಿಶನ್ನಿನವರಿಂದ) ವೈಗಲನದು ಉತ್ತಮವೆಂದೆನಿಸಿವೆ. ಇಷ್ಟೇ ಅಲ್ಲ, ಮೂಲದಲ್ಲಿಯ ಪದ್ಯಗಳನ್ನು ಕನ್ನಡದ್ದೇ ಆದ ವೃತ್ತಗಳಲ್ಲಿ (ಚೌಪದಿ, ಷಟ್ಪದಿ) ಅನುವಾದಿಸಲಾಗಿದ್ದು ಅವು ಹೊಸಗನ್ನಡದ ಆದಿಮ ಪದ್ಯಗಳೆನಿಸಿವೆ. (ರಂ. ಶ್ರೀ. ಮುಗಳಿಯವರು ತಮ್ಮ 'ಕನ್ನಡ ಸಾಹಿತ್ಯದ ಇತಿಹಾಸ' ಎಂಬ

ವಿವಿಧ ಭಾರತೀಯ ಭಾಷಾನುವಾದಿತ ಕೃತಿಯಲ್ಲಿ ಅದರ ಈ ಹೆಚ್ಚುಗಾರಿಕೆಯನ್ನು ಎತ್ತಿ ತೋರಿಸಿದ್ದಾರೆ).

ಅವನ ಭಾಷಾಂತರ ಸಾಮರ್ಥ್ಯವನ್ನು ತನ್ನದರೊಂದಿಗೆ ಹೋಲಿಸಿಕೊಳ್ಳುತ್ತ ಮೊಗ್ಲಿಂಗ್ ಹೇಳುವುದು ಹೀಗೆ:

He had a peculiar gift in translating. He did not like to translate quite literally. But he entered so thoroughly into the spirit and taste of the original before him and had so correct an instinct in seizing the appropriate materials from the stores of the sacred languages for reconstructing the building as it were, on new ground that, if he did not produce photographs, (which too often look lifeless though of course correct), he gave speaking likenesses.

We had many a brotherly battle on this score in translating the scriptures, because I often wished to obtain, what sometimes proved an impossibility, a perfect transfusion not of the substance only, but of the form also of the inspired text into the Canerese mould. ....He would sometimes treat me, who was sadly inferior to him in philological attainments in a manner that would remind me of the hallucination of some learned Professor, seized with profound respeet for the scholarship of the follower who carries his books for him !

ಇದು ಮಾತ್ರವಲ್ಲ, ಮಿಶನ್ನಿನವರ 'ಕ್ರೈಸ್ತ ಗೀತಗಳು' ಸಂಕಲನದಲ್ಲಿಯೂ ವೈಗಲನ ಪದ್ಯರಚನೆಗಳಿವೆ. (ಅದರ ೧೮೪೫ರ ಪ್ರಥಮ ಆವೃತ್ತಿಯ ೧೦೦ ಗೀತಗಳಲ್ಲಿ ೨೩ ಗೀತಗಳು ವೈಗಲನವೇ ಆಗಿವೆ). ಇದೊಂದು ಮಾದರಿ :

(ಮೂಲ :Gott erhalte.........)

ಮೃತ್ಯುವಿನ ಬಂಧವನ್ನು ಬಿಡಿಸಿದ ಮನುಜ !
ಶತ್ರು ತಂದ ಸೇನೆಯನ್ನು ಓಡಿಸಿದ ನಾಯಕ !
ತ್ರಾಣದಿಂದ ಲೋಕವಾಳು, ಕ್ರೂಜೆ ತಾಳಿದವನೆ !
ಜಯಪ್ರದನಾಗಿ ಬಾಳು, ಘನವುಳ್ಳ ರಾಜನೆ

o o o

ಕ್ಷೇಮವಾಗಿ ಸಾಯುತ್ತೇನೆ ತಂದೆಗಾತ್ಮವೊಪ್ಪಿಸಿ
ಗೋರಿದ್ವಾರ ಹಾಯುತ್ತೇನೆ ನಿನ್ನ ಗೋರಿ ನೆನಸಿ
ಈ ಶರೀರವನ್ನು ಕೀಟ ತಿಂದರೇನು ಚಿಂತೆಯು ?
ನಿತ್ಯ ಮಹಿಮೆ ಕಿರೀಟ ಹೊಂದಿ
ಹರ್ಷಗೊಂಬೆನು.

ಆಧುನಿಕ ಸಾಹಿತ್ಯದ ಆರಂಭ ಕಾಲದ ಕವಿತೆ ಇದಾಗಿದ್ದರೂ ಸಾಕಷ್ಟು ಉತ್ತಮ ಮಟ್ಟದ ರಚನೆಯೇ ಆಗಿದೆ. ಹೊಸಗನ್ನಡ ಕವಿತಾ ರಚನೆಗೆ ಕ್ರೈಸ್ತ ಪದ್ಯಗಳೇ ಮೊದಲ ಹೆಜ್ಜೆಗಳು. ಅದನ್ನು ಆರಂಭಿಸಿದವರಲ್ಲಿ ವೈಗಲ್ ಎದ್ದು ತೋರುತ್ತಾನೆ.

ಜರ್ಮನಿಯ ಸುಪ್ರಸಿದ್ಧ ZDMG ಪತ್ರಿಕೆಯಲ್ಲಿ ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಕುರಿತು, ತಕ್ಕಮಟ್ಟಿಗೆ ಸುದೀರ್ಘವಾದ ಲೇಖವೊಂದು ಪ್ರಕಟವಾಯಿತು. ಅದುವರೆಗೆ ಕುಮಾರವ್ಯಾಸಭಾರತ, ಜೈಮಿನಿಭಾರತ, ರಾಜಶೇಖರವಿಳಾಸ, ದಾಸರ ಕೆಲವು ಹಾಡುಗಳು- ಮುಂತಾಗಿ ಕೆಲವೇ ಕೃತಿಗಳು ಕನ್ನಡ ಕಾವ್ಯದ ಪ್ರತೀಕಗಳಾಗಿ ಬಳಕೆಯಲ್ಲಿದ್ದುವು-ಅದೂ ತಾಡವೋಲೆ, ಇಲ್ಲವೆ ಕೈಬರಹದ ಕಾಗದಪ್ರತಿಗಳ ರೂಪದಲ್ಲಿ. ಕನ್ನಡ ಸಾಹಿತ್ಯದ ಪರಂಪರೆಯ ಕಲ್ಪನೆ ಕನ್ನಡಿಗರಿಗೇ ಇರಲಿಲ್ಲ. ಹೀಗಿರುತ್ತಾ ಯುರೋಪಿಯನ್ನರಿಗೆ ಅದರ ಪರಿಚಯ ಮಾಡಿಕೊಟ್ಟದ್ದು ಇನ್ನಷ್ಟು ಹೆಗ್ಗಳಿಕೆಯ ಅಂಶವಾಗಿದೆ.

ಈ ಲೇಖದ ಕರ್ತೃ ವೈಗಲ್. ಅದನ್ನು ಈತ ಬರೆದದ್ದಕ್ಕೆ ತುಸು ಹಿನ್ನೆಲೆ ಇದೆ. ಆ ಕಾಲಕ್ಕೆ ಮಿಶನ್ನಿನ ತರಬೇತಿ ಕೇಂದ್ರದ ಪ್ರಾಚಾರ್ಯನಾಗಿದ್ದ ಡಾ॥ ಹಾಫ್‌ಮನ್ ಇಂಥದೊಂದು ಲೇಖವನ್ನು ಬರೆಯಲು ಮೊಗ್ಲಿಂಗನಿಗೆ ಕೇಳಿದ್ದನು. (ಆವಾಗ ಮೊಗ್ಲಿಂಗ್ ಸ್ವದೇಶದಲ್ಲಿಯೆ ಇದ್ದ. ಆದರೆ ಅವನು "ಮೂರು ತಿಂಗಳ ಅವಧಿಯನ್ನು ಕೊಡಿರಿ. ಈ ವಿಷಯದಲ್ಲಿ ನನಗಿಂತ ಬಲ್ಲಿದನಾದ ವೈಗಲ್‌ನಿಂದ ಬರೆಸಿ ತರಿಸುವೆ" ಎಂದು ಹೇಳಿದನಂತೆ.

ಸರಿ, ಅವನ ಪತ್ರವನ್ನು ಹಡಗವೊಂದು ಹೊತ್ತು ತಂದು ವೈಗಲನಿಗೆ ಒಪ್ಪಿಸಿತು. ಇನ್ನೀಗ ಆ ಹಡಗು ಮರಳಿ ಹೋಗುವುದರೊಳಗೆ ಎಂದರೆ ೧೦-೧೫ ದಿನಗಳ ಅವಧಿಯಲ್ಲಿ ಬರೆದು ಕಳಿಸಬೇಕೆಂದು ಮೊಗ್ಲಿಂಗನ ಆಗ್ರಹ. ಅಂತೂ ಲೇಖವನ್ನು ಮುಗಿಸಿ ಕಳಿಸಿದ್ದಾಯಿತು. ಬೇಗ ಪ್ರಕಟವೂ ಆಯಿತು.

ಹೀಗೆ ಸಮಯದ, ಅದಕ್ಕಿಂತ ಹೆಚ್ಚಾಗಿ ಸಾಮಗ್ರಿಯ ಅಭಾವ ಇರುವಾಗಲೂ ವೈಗಲ್ ಈ ಲೇಖದಲ್ಲಿ ಹೇಳಿದ ಕೆಲವು ಅಂಶಗಳು ವೈಶಿಷ್ಟ್ಯಪೂರ್ಣವೆನಿಸಿವೆ. ಉದಾ.ಗೆ ಆತನು ಸುರುವಿಗೆ ಕನ್ನಡ ಭಾಷೆಯನ್ನು ಸಂಸ್ಕೃತ ಹಾಗೂ ದ್ರಾವಿಡ ಭಾಷೆಗಳಿಗೆ ಹೋಲಿಸುತ್ತ ವಿವರಿಸಿದುದು. ಈ ಬಗೆಯ ತೌಲನಿಕ ಅಭ್ಯಾಸ ಆಗಿನ ದಿನಗಳಲ್ಲಿ ಇರಲೇ ಇಲ್ಲ. ಸಾಹಿತ್ಯ ಕೃತಿಗಳ ವಿಚಾರವಾಗಿ ಬರೆಯುತ್ತ, ಯಕ್ಷಗಾನ ಪ್ರಸಂಗಗಳು ಹಾಗೂ ಜಾನಪದ ಹಾಡುಗಳು ಇವನ್ನು ಸಾಹಿತ್ಯದ ಅಂಗವಾಗಿಯೇ ಪರಿಗಣಿಸಿದುದು. 'ಜನಪದ ಸಾಹಿತ್ಯವು ಸ್ವತಂತ್ರ ಶುದ್ಧ ಕಾವ್ಯ; ಅಂತರ್ ಸೌಂದರ್ಯದಲ್ಲಿ ಲಿಖಿತ ಕಾವ್ಯಗಳಿಗೆ ಯಾವುದಕ್ಕೂ ಕಡಿಮೆ ಅಲ್ಲ. ಅದರಂತೆ ಇಲ್ಲಿಯ ಜನಪದ ಕಥೆಗಳು ಪ್ರಪಂಚದ ಯಾವುದೇ ಜನಪದ ಕಥನಗಳಿಗೂ ಸರಿಸಾಟಿಯಾಗಿವೆ" ಎಂದು ಹೇಳಿ ಅವಕ್ಕೆ ಸಾಹಿತ್ಯಿಕ ಮೌಲ್ಯವನ್ನು ತಂದುಕೊಟ್ಟಿದ್ದಾನೆ. (ಮುಂದೆ ಕನ್ನಡ ಸಾಹಿತ್ಯವಾಹಿನಿಯು ಸಾಗಿ ಬಂದಿದ್ದರೂ, ಜನಪದ ಸಾಹಿತ್ಯಕ್ಕೆ ಮನ್ನಣೆ ದೊರೆತುದು ಕಳೆದ ೪೦ ವರ್ಷಗಳಿಂದೀಚೆಗೆ ಮಾತ್ರ). ಮುಂದುವರಿದು ವೈಗಲ್ ೧೮೩೦–೧೮೪೫ರ ವರೆಗಿನ ಕ್ರೈಸ್ತವಾಙ್ಮಯವನ್ನೂ ಸಮೀಕ್ಷೆ ಮಾಡಿದ್ದಾನೆ. ಆ ನಿಮಿತ್ತದಿಂದ 'ಇಲ್ಲಿಯ ದೇಶೀಯರು ಕಲಿಕಿರೋದು ಅಷ್ಟಕ್ಕಷ್ಟೆ, ಹೇಗೆ ಬರೆದರೂ ನಡೀತದೆ' ಎಂಬ ಗ್ರಹಿಕೆಯಿಂದ ಹಸಿಬಿಸಿಯಾಗಿ ಇವುಗಳು ಅನುವಾದ ಮಾಡಿದ್ದಾರೆಂದು ಟೀಕಿಸುವ ಧೈರ್ಯವನ್ನೂ ತೋರಿದ್ದಾನೆ.[1]

ಹಳಗನ್ನಡ ಶಬ್ದಗಳ ಕೋಶವಾಂತಿರುವ 'ಕರ್ನಾಟಕ ಶಬ್ದಮಂಜರಿ' ಎಂಬ ಚಿಕ್ಕ ಕೃತಿಯಿದೆ. ಇದು ಕನ್ನಡದ ಅಮರಕೋಶವೇ ಸೈ ಎಂಬುದಾಗಿ ವೈಗಲ್ ಮೇಲಿನ ಲೇಖದಲ್ಲಿ ತನ್ನ ಮೆಚ್ಚಿಕೆಯನ್ನು ಸೂಚಿಸಿದ್ದಾನೆ. ಈ ಮೆಚ್ಚಿಕೆಯ ಪರಿಣಾಮವೊ ಎಂಬಂತೆ ವೈಗಲ್ ಅದನ್ನು ಇಂಗ್ಲಿಶ್‌ಗೆ ಅನುವಾದಿಸುವುದೆಂದು ಕೈಗೆತ್ತಿಕೊಂಡ. ಆದರೆ ಅದನ್ನು ಮುಗಿಸಿದಂತೆ ತೋರಲಿಲ್ಲ.[2]

ಕನ್ನಡ ಭಾಷೆಯಲ್ಲಿ ಅವನು ಪಡೆದಿದ್ದ ಪರಿಣತಿಯಿಂದಾಗಿ ಅವನು ಹಲವಾರು ಚಿಕ್ಕ ಮತಪುಸ್ತಕಗಳನ್ನು ಬರೆಯಬೇಕಾಗಿ ಬಂದಿತು.[3] ಆದರೆ ಕ್ರೈಸ್ತ ಸಾಹಿತ್ಯಕ್ಕೆ ಅವನಿಂದ ಸಂದ ಬಹು ದೊಡ್ಡ ಕೊಡುಗೆ ಎಂದರೆ ಬೈಬ

---

1. ಈ ಲೇಖದ ಐತಿಹಾಸಿಕ ಮಹತ್ವವನ್ನು ಮನಗಂಡು ಗೀತಾ ಧರ್ಮಪಾಲ ಎಂಬವರು ಅದರ ಇಂಗ್ಲಿಶ್ ಅನುವಾದವನ್ನು The Quarterly Journal of the Mythic Society, Bangalore—ಈ ಪತ್ರಿಕೆಯಲ್ಲಿ ([illegible]) ಪ್ರಕಟಪಡಿಸಿದ್ದಾರೆ.

2. ಬಾಸೆಲಿನ ಆರ್ಕೈವ್ಸ್‌ಗೆ ನಾನು ಹೋದಾಗ ಇದರ ಒಂದೆರಡು ಹಾಳೆಗಳು ಮಾತ್ರ ನನಗೆ ನೋಡಸಿಕ್ಕಿದುವು. ಅಂದಹಾಗೆ ಈ ಅವನ ಹಸ್ತಾಕ್ಷರವೂ ಮಿಶನ್ನಿನ ಮುದ್ರಣಾಲಯದಲ್ಲಿ ಮುದ್ರಿತವಾದ ಕೆಲವು ಕಲ್ಲಚ್ಚಿನ ಪುಸ್ತಕಗಳ ಹಸ್ತಾಕ್ಷರವೂ ಒಂದೇ ಆಗಿದ್ದುದು ಕಂಡು ಬಂತು. ತಾತ್ಪರ್ಯ: ವೈಗಲನೇ ಬಳಪದ ಕಲ್ಲಿನ ಮೇಲೆ ಅಕ್ಷರಗಳನ್ನು ಕೊರೆದು ಮುದ್ರಣಕ್ಕೆಂದು ಅಣಿಗೊಳಿಸಿರಬೇಕು. ಮಂಗಳೂರು ಮುದ್ರಣಕ್ಕೆ ನಾಂದಿಯನ್ನು ಹಾಡಿದವನೆಂಬ ಮಾತಿಗೆ ಈ ಕೈಂಕರ್ಯವನ್ನೂ ಸೇರಿಸಬೇಕು.

3. ಅವಾವುವೆಂದರೆ:

—ಪ್ರಾರ್ಥನೆಗಳು, ಮುಂ. (Canerese Prayers. Private Prayers for Native Christians for the morning and evening of every day of the week). ಪು. [illegible]

—ದೇವರ ವಾಕ್ಯದ ಬೋಧನೆಯ ಪ್ರಶ್ನೋತ್ತರ (First Catechism), ಪು. [illegible]

—ದೃಢೀಕರಣದ ಪ್ರಶ್ನೋತ್ತರ (Second Catechism to be learned for confirmation)

ಬೈಬಲ್ ಕನ್ನಡಾನುವಾದದ ಪರಿಷ್ಕರಣ ಕಾರ್ಯ. ಅನೇಕರಿಗೆ ಗೊತ್ತಿದ್ದ ಹಾಗೆ ಮದ್ರಾಸ ಆಕ್ಸಿಲಿಯರಿ ಬೈಬಲ್ ಸೊಸೈಟಿಯು ೧೮೪೮ರಲ್ಲಿ ಕರ್ನಾಟಕದ ಎಲ್ಲ ಪ್ರೊಟೆಸ್ಟೆಂಟ್ ಮಿಶನ್ ಸಂಸ್ಥೆಗಳ ಪ್ರತಿನಿಧಿಗಳಿರುವ ಒಂದು ಸಮಿತಿಯನ್ನು ರಚಿಸಿ. ಆಗಿನ ಕನ್ನಡ ಬೈಬಲಿನ ನವೀಕರಣದ (revision) ಕೆಲಸವನ್ನು ಒಪ್ಪಿಸಿತು. ವೆಸ್ಲೆಯನ್, ಲಂಡನ್ ಮಿಶನ್ ಸಂಸ್ಥೆಗಳಿಂದ ಬಂದ ಪ್ರತಿನಿಧಿಗಳಲ್ಲಿ ಹಲವಾರು ಹಿರಿಯ ಮಿಶನರಿಗಳಿದ್ದಾಗ್ಯೂ ಇದರ ಅಧ್ಯಕ್ಷತೆಯನ್ನು ವಹಿಸಿಕೊಟ್ಟದ್ದು ೩೪ ವರ್ಷದ ವೈಗಲ್‌ನಿಗೆ.

ಮದ್ರಾಸ ಸಂಘದವರು ಮೊದಲಿಗೆ ಹೊಸ ಒಡಂಬಡಿಕೆಯ ಅನುವಾದ ಭಾಗಗಳನ್ನು ನವೀಕರಿಸ ಹೇಳಿದ್ದರು. ವೈಗಲ್ ಯಾವ ದೇಶೀ ಮುನಷಿಯ (ಆಗಿನ ಕಾಲದ ಪದ್ಧತಿಯಂತೆ) ಸಹಾಯವನ್ನು ಪಡೆಯದೇ, ತಾನೇ ಆ ಕೆಲಸವನ್ನು ಪೂರೈಸಿದುದು ಅವನ ಭಾಷಾ ಪರಿಣತಿಗೆ ನಿದರ್ಶನವಾಗಿದೆ. ಅಂತೂ ಆ ಕೆಲಸ ಸಮರ್ಪಕವಾಗಿ ಮುಗಿದದ್ದನ್ನು ಕಂಡು ಹಳೆಯ ಒಡಂಬಡಿಕೆಯ ಕಾರ್ಯವನ್ನೂ ಇವನಿಗೇ ಒಪ್ಪಿಸಿದರು.

ವೈಗಲ್ ಜನರೊಂದಿಗೆ ಆಗಿಂದಾಗ ಹೊಂದಿಕೊಳ್ಳುವ ಸ್ವಭಾವದವನಿರಲಿಲ್ಲ. ಪರಿಚಯ ಕಡಿಮೆ ಇದ್ದರೆ ಮುದುಡಿಕೊಂಡು ಬಿಡುತ್ತಿದ್ದ. ಈ ಪರಿಷ್ಕರಣ ಸಮಿತಿಯಲ್ಲಿ ಆರು ಜನ ಇದ್ದರು. ಅನುವಾದಿತ ಇಲ್ಲವೆ ಪರಿಷ್ಕೃತವಾದುದನ್ನು ಓದಿ ಚರ್ಚಿಸುವುದು ವಾಡಿಕೆ. ವೈಗಲ್ ತನ್ನ ಭಾಗವನ್ನು ಓದಿ ಹೇಳಿದಾಗ ಸ್ವಾಭಾವಿಕವಾಗಿಯೇ ಬೇರೆ ಪದಗಳನ್ನು ಚರ್ಚಿಸುತ್ತಿದ್ದರು. ವೈಗಲನಿಗೆ ಆಗ ಮುಜುಗರ, ತಪ್ಪಿತಸ್ಥನ ಭಾವನೆ–ನನ್ನ ಅನುವಾದ ಸಾಮರ್ಥ್ಯವನ್ನೆ ಕೆಣಕುತ್ತಿದ್ದಾರೆ ಎಂಬ ರೀತಿಯಲ್ಲಿ. ಅನೇಕ ಬಾರಿ ತನ್ನದು ಸರಿ ಎಂದು ತೋಚಿದ್ದರೂ ಅದನ್ನು ಗಟ್ಟಿಯಾಗಿ ಸಮರ್ಥಿಸಿಕೊಳ್ಳಲು ಹಿಂದೇಟು. ಕಾರಣ ಗೊತ್ತೆ ? ಹಾಗೇ ಮಾಡಿದರೆ ಇತರರಿಗಿಂತ ತಾನು ಶ್ರೇಷ್ಠ ಎಂದು ಪ್ರದರ್ಶಿಸಿದಂತಾಗಲಾರದೆ ? ...ಹೀಗಿರುತ್ತ ಯಾವುದೊ ಒಂದು ಸಭೆಯಲ್ಲಿ ಆರರ ಪೈಕಿ ಮೂವರು ಮಾತ್ರ ಹಾಜರಿದ್ದರಂತೆ. ವೈಗಲ್‌ನಿಗೆ ಆಗ ಪರಮ ನಿಶ್ಚಿಂತೆ!

ಪ್ರವಚನ ಸಂದರ್ಭಗಳಲ್ಲಿಯೂ ಈ ಮನೋಭಾವದ ಪರಿಣಾಮ ವ್ಯಕ್ತವಾಗುತ್ತಿತ್ತು. ಆಗಿನ ಕಾಲದಲ್ಲಿ ಸಂತೆ, ಪೇಟೆಯ ಸ್ಥಳಗಳಲ್ಲಿ ಪ್ರಚಾರ–ಪ್ರವಚನಗಳನ್ನು ನಡೆಸಬೇಕಿತ್ತಲ್ಲವೆ. ಅದನ್ನು ಕೇಳ ಬರುವವರಲ್ಲಿ ಹೆಚ್ಚಿನವರು ಕ್ರೈಸ್ತಮತ ವಿರೋಧಿಗಳು, ತಾನೇ. ಪ್ರಸಂಗ ಬಂದರೆ ಅವರು ಮಿಶನರಿ ಜನರೊಡನೆ ಕಾಲ್ಕೆದರಿ ಜಗಳ ತೆಗೆಯಲೂ ಸಿದ್ಧ. ಅಂಥ ಸಭೆಯಲ್ಲಿ ಪ್ರಭಾವಯುತವಾಗಿ ಪ್ರವಚನ ಮಾಡುವರೆ, ಹೆಬಿಕ್,ಮೊಗ್ಲಿಂಗರಂತಹರೇ ಸೈ ! ಅದೇ, ಚರ್ಚಿನ ಶಾಂತ ವಾತಾವರಣದಲ್ಲಿ, ಆಸ್ತಿಕ ಭಾವನೆ ಇದ್ದವರ ಸಮ್ಮುಖದಲ್ಲಿ ಪ್ರವಚನ ಮಾಡುವರೆ, ವೈಗಲನಂತೆ ನಿತಾಂತವಾಗಿ ಭಾವಪೂರ್ಣವಾದ ಪ್ರವಚನ ಮಾಡುವವರು ಬಾಸೆಲ್ ಮಿಶನ್ನಿನಲ್ಲಿ ಇನ್ನಾರೂ ಇದ್ದಿರಲಾರರು.

ಈ ಬಗೆಯ ಮಿದುತನವೇ ಕುಟುಂಬ ಜೀವನದಲ್ಲಿ ಅವನನ್ನು ಹೆಂಗರುಳಿನವನನ್ನಾಗಿ ಮಾಡಿದ್ದಿತು. ಮಕ್ಕಳಿಗೆ ಸಾದಾ ನೆಗಡಿ–ಕೆಮ್ಮು ಬಂದರೂ ಅವನು ಕಳವಳಗೊಳ್ಳುತ್ತಿದ್ದನು. ಪತ್ನಿ ಪಾಲನ್‌ಳಿಗೆ ಒಮ್ಮೆ ಜ್ವರ. ಅದು ನಿಂತ ಮೇಲೂ ಅವಳಿಗೆ ಇನ್ನೂ ಮೈಬಿಸಿ ಎಂಬ ರೀತಿಯಲ್ಲೇ ಶುಶ್ರೂಷೆ ಮಾಡುತ್ತಿದ್ದನಂತೆ !

ವೈಗಲ್ ನೋಡುವುದಕ್ಕೆ ಲಕ್ಷಣವಂತ. ಅಗಲವಾದ ಹಣೆ, ವೈಚಾರಿಕತೆಯನ್ನೂ ವಿಷಣ್ಣಭಾವವನ್ನೂ ಏಕಕಾಲಕ್ಕೆ ಹೊರ ಸೂಸುವಂತಹ ಕಣ್ಣುಗಳು, ತಕ್ಕಮಟ್ಟಿಗೆ ಎತ್ತರದ ನಿಲುವೇ. ಆದಾಗ್ಯೂ ಎದೆ ಬಾಗಿಸಿಯೇ ಓಡಾಡುವ ಪ್ರವೃತ್ತಿಯವ. ವೇಷ ಭೂಷಣದತ್ತ ಗಮನ ಕೊಟ್ಟವನೇ ಅಲ್ಲ. "ದಾಡಿ ಮಾಡಿಕೊಳ್ಳುವುದಕ್ಕಷ್ಟೆ ಕನ್ನಡಿಯನ್ನು ಬಳಸುತ್ತಿದ್ದ–ಅದೂ ಒಂದೆರಡು ಮಿನಿಟು ಮಾತ್ರ" ಎಂದು ಮೊಗ್ಲಿಂಗ್ ನಗೆಯಾಡಿದ್ದಾನೆ.

ಆದರೇನು, ವೈಗಲ್ ಅಷ್ಟೊಂದು ಆರೋಗ್ಯವಂತನಲ್ಲ. ಬೌದ್ಧಿಕವಾಗಿ ಹಾಗೂ ದೈಹಿಕವಾಗಿ ತುಂಬಾ ಶ್ರಮಿಸುತ್ತಿದ್ದನಾದ್ದರಿಂದ ಮೇಲಿಂದ ಮೇಲೆ ಅಜಾರಿ ಬೀಳುತ್ತಿದ್ದ. ಆಗೆಲ್ಲ ಸಾಯುವ ಮಾತನ್ನೂ ಆಡುತ್ತಿದ್ದನಂತೆ ("ಪಾಲಿನ್, ಪ್ರಾಣ ಹೋಗುವಾಗ ಹೆಚ್ಚು ಮಾತಾಡಲು ಆಗಲಿಕ್ಕಿಲ್ಲ. ಈಗ ಹೇಳಿಬಿಡುವೆ"–ಇ.). ಕ್ರಿ. ಶ. ೧೮೫೫ರ ಜೂನ್ ತಿಂಗಳಲ್ಲಿ ಒಂದು ದಿನ ಜೋರಾಗಿ ಜ್ವರ ಬಂದು, ಮೈಯಲ್ಲಿ ಗದಗುದಿಕೆ ಆರಂಭವಾಯಿತು. ಆ ರಾತ್ರಿ ಕಳೆದು ಬೆಳಗಿನ ಜಾವದಲ್ಲಿ ಅವನು ಕೊನೆಯುಸಿರನ್ನು ಎಳೆಯಬಹುದೆಂಬ ಕಲ್ಪನೆ,

ಮನೆ ಜನ, ಸಹೋದ್ಯೋಗಿಗಳಿಗೆ ಇರಲೇ ಇಲ್ಲ. ಮರಣ ಕಾಲಕ್ಕೆ ಅವನಿಗೆ ಕೇವಲ ೩೯ ವರುಷ.

ಅವನ ಸಾವು ಸನ್ನಿಹಿತವೆಂದು ತಿಳಿದು ಬಂದಿದ್ದರೆ, ತಮ್ಮಿಬ್ಬರಲ್ಲಿ ಈ ರೀತಿಯ ಸಂಭಾಷಣೆ ನಡೆಯಬಹುದಿತ್ತೆಂದು ಮೊಗ್ಲಿಂಗ್ ಊಹಿಸಿಕೊಂಡಿದ್ದಾನೆ :

“ಡಿಯರ್ ಗಾಡ್‌ಫ್ರೆ, ನೀನು ಈ ಲೋಕದಿಂದ ಇಲ್ಲವಾದ ಮೇಲೆ, ನಿನ್ನ ಬಗ್ಗೆ ನಾನು ಏನು ಹೇಳಲಿ– ಎಂದು ಯೋಚಿಸುತ್ತಿದ್ದೇನೆ.”

“ಚೇಷ್ಟೆ ಬೇಡ, ಹರ್ಮನ್. ನಾನು ಸತ್ತಮೇಲೆ ‘ನಮ್ಮ ಗಾಡ್‌ಫ್ರೆ ಹೀಗಿದ್ದ ಹಾಗಿದ್ದ’ ಎಂದು ಏನೇನೆಲ್ಲ ಹೇಳಬೇಡ. ನಾನೊಬ್ಬ ಹುಲು ಮನುಷ್ಯ. ನನ್ನ ಬಗ್ಗೆ ಎಷ್ಟು ಕಡಿಮೆ ಹೇಳ್ತೀಯೋ, ಅಷ್ಟು ಒಳ್ಳೆಯದು.”

ಈ ಬಗೆಯ ಶಾಲೀನತೆ ಮಿಶನರಿ ಜನರಲ್ಲಿರಬೇಕಾದ ಸ್ತುತ್ಯ ಗುಣವೇ ಆದರೂ, ಅದು ಅತಿಯಾಗಿದ್ದರೆ ದೋಷವೇ ಸೈ !

**ಆಧಾರ :**

೧. H. Moegling : Memoir of the late Rev. G. Weigle Christian Herald, Madras, 1855

೨. Basel ನ Mission Archives ನಲ್ಲಿರುವ ಕೆಲವು ದಾಖಲೆಗಳು

೩. ಶ್ರೀನಿವಾಸ ಹಾವನೂರ : ಹೊಸಗನ್ನಡದ ಅರುಣೋದಯ, ಮೈಸೂರು, ೧೯೭೪